

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1696(1921)

ಸದಸ್ಯರ ಹೆಸರು : ಶ್ರೀ ಸೂರಜ್ ರೇವಣ್ಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ).

ಉತ್ತರಿಸಬೇಕಾದ ದಿನಾಂಕ : 16-03-2022.

ಉತ್ತರಿಸುವ ಸಚಿವರು : ಮಾನ್ಯ ಮುಜರಾಯಿ, ಹಜ್ ಮತ್ತು ವಕ್ಫ್ ಸಚಿವರು.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ರಾಜ್ಯದಲ್ಲಿ ಕಳೆದ 03 ವರ್ಷಗಳಿಂದ ಹಜ್ ಯಾತ್ರೆಗೆ ಆಯ್ಕೆಯಾಗಿರುವ ಮುಸ್ಲಿಂ ಜನಾಂಗದವರ ಸಂಖ್ಯೆ ಎಷ್ಟು; (ವಿಧಾನಸಭಾ ಕ್ಷೇತ್ರವಾರು ವರ್ಷವಾರು ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ 2019ನೇ ಸಾಲಿನಲ್ಲಿ ಹಜ್ ಯಾತ್ರೆಗೆ ಆಯ್ಕೆಯಾಗಿರುವ ಮುಸ್ಲಿಂ ಜನಾಂಗದವರ ಒಟ್ಟು ಸಂಖ್ಯೆ:8337. ಜಿಲ್ಲಾವಾರು ಮಾಹಿತಿಯನ್ನು "ಅನುಬಂಧ-1" ರಲ್ಲಿ ನೀಡಲಾಗಿದೆ.<br>ಕೋವಿಡ್ ಮಹಾಮಾರಿಯಿಂದಾಗಿ 2020 ಹಾಗೂ 2021ರಲ್ಲಿ ಅಂತರಾಷ್ಟ್ರೀಯ ಯಾತ್ರಾರ್ಥಿಗಳಿಗೆ ಹಜ್‌ಯಾತ್ರೆಯನ್ನು ಸೌಧಿ ಅರೇಬಿಯಾ ಸರ್ಕಾರವು ರದ್ದುಗೊಳಿಸಿರುತ್ತದೆ. |
| ಆ. | ರಾಜ್ಯದಲ್ಲಿ ಹಜ್ ಯಾತ್ರೆಗೆ ಫಲಾನುಭವಿಗಳನ್ನು ಆಯ್ಕೆ ಮಾಡಲು ಅನುಸರಿಸಲಾಗುವ ಮಾನದಂಡಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ರಾಜ್ಯ ಹಜ್ ಸಮಿತಿಯ ವತಿಯಿಂದ ಪ್ರತಿ ವರ್ಷ ಯಾತ್ರಾರ್ಥಿಗಳು ತಮ್ಮ ಸ್ವಂತ ಖರ್ಚಿನಿಂದ ಹಜ್ ಯಾತ್ರೆಗೆ ಪ್ರಯಾಣ ಮಾಡುತ್ತಾರೆ. ಹಜ್ ಯಾತ್ರೆಗೆ ತೆರಳುವವರು ತಮ್ಮ ಸ್ವಂತ ಖರ್ಚಿನಿಂದ ಹಜ್‌ಯಾತ್ರೆ ಕೈಗೊಳ್ಳಬೇಕು. ಇವರಿಗೆ ತಮ್ಮ ಯಾತ್ರೆಯ ಸಮಯದಲ್ಲಿ, ರಾಜ್ಯ ಹಜ್ ಸಮಿತಿಯ ವತಿಯಿಂದ ಪ್ರಯಾಣಕ್ಕೆ ಮೊದಲು ಬೆಂಗಳೂರಿನಲ್ಲಿ / ಮಂಗಳೂರಿನಲ್ಲಿ ಉಳಿದುಕೊಳ್ಳಲು ಸೌಲಭ್ಯವನ್ನು ಒದಗಿಸಲಾಗುತ್ತದೆ. ಆರ್ಥಿಕವಾಗಿ ಯಾವುದೇ ರೀತಿಯ ಅನುದಾನ / ಸಹಾಯಧನ ನೀಡಲಾಗುವುದಿಲ್ಲ. ಆದುದರಿಂದ ಹಜ್‌ಗಾಗಿ ಆಯ್ಕೆಯಾದ ಅರ್ಜಿದಾರರು ಫಲಾನುಭವಿಗಳಾಗಿರದೆ, ಕೇವಲ ಶಿಬಿರಾರ್ಥಿಗಳಾಗಿರುತ್ತಾರೆ. ಹಜ್‌ಯಾತ್ರೆಗಾಗಿ ಅರ್ಜಿದಾರರು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಬೇಕು. ಅರ್ಜಿದಾರರನ್ನು ಆಯ್ಕೆ ಮಾಡಲು ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುತ್ತದೆ.<br>1. ಕರ್ನಾಟಕ ರಾಜ್ಯ ವಾಸಿಯಾಗಿರಬೇಕು<br>2. ಅಧಿಕೃತ ದಾಖಲೆಗಳಾದ ಪಾಸ್‌ಪೋರ್ಟ್‌ನ್ನು ಹೊಂದಿರಬೇಕು.<br>3. ಪಾಸ್‌ಪೋರ್ಟ್ ಹಜ್ ಆಗುವ ದಿನಾಂಕದಿಂದ 5 ತಿಂಗಳವರೆಗೆ ಮಾನ್ಯವಾಗಿರಬೇಕು<br>4. ತೀವ್ರತರವಾದ ಕಾಯಿಲೆಗಳಿಂದ / ರೋಗಗಳಿಗೆ ತುತ್ತಾಗಿರಬಾರದು<br>5. ಗರ್ಭಿಣಿಯಾದವರು ಅರ್ಹರಿಲ್ಲ<br>6. ಕ್ರಿಮಿನಲ್ ಮೊಕದ್ದಮೆ ಬಾಕಿ ಇದ್ದು, ಮಾನ್ಯ ನ್ಯಾಯಾಲಯದಿಂದ ಅನುಮತಿ ಪಡೆಯದೆ ಇರುವವರು ಅರ್ಹರಿಲ್ಲ. |

| | | |
|---|---|---|
| | | 7. ಮಾನ್ಯ ನ್ಯಾಯಾಲಯವು ಅಂತರಾಷ್ಟ್ರೀಯ ಪ್ರಯಾಣವನ್ನು ನಿರ್ಬಂಧಿಸಿರುವ ವ್ಯಕ್ತಿಗಳು ಅರ್ಹರಿಲ್ಲ.<br>8. ಪ್ರಸಕ್ತ ಸಾಲಿನಲ್ಲಿ ಕೋವಿಡ್ ಲಸಿಕೆ ಎರಡು ಡೋಸ್ ಗಳನ್ನು ಪಡೆಯದೆ ಇರುವವರು ಅರ್ಹರಿಲ್ಲ.<br>ಪ್ರತಿ ವರ್ಷ ಮುಂಬೈನ ಭಾರತೀಯ ಹಜ್ ಸಮಿತಿಯವರು ನಮ್ಮ ರಾಜ್ಯಕ್ಕೆ ಜನಸಂಖ್ಯೆ ಆಧಾರದ ಮೇಲೆ ಜಿಲ್ಲಾವಾರು ಕೋಟಾ ನಿಗಧಿಪಡಿಸುತ್ತಾರೆ. ಕೋಟಾಕ್ಕಿಂತ ಅರ್ಜಿಗಳು ಕಡಿಮೆ ಬಂದಲ್ಲಿ ಎಲ್ಲಾ ಅರ್ಜಿದಾರರು ಯಾತ್ರೆಗೆ ಅರ್ಹರಾಗುತ್ತಾರೆ. ಹೆಚ್ಚಾದಲ್ಲಿ ಮುಂಬೈನ ಭಾರತೀಯ ಹಜ್ ಸಮಿತಿಯ ವತಿಯಿಂದ ಕಲ್ಪಿಸಿರುವ ಕೇಂದ್ರೀಕೃತ ವೆಬ್ ಸರ್ವರ್‌ನಿಂದ ಗಣಕೀಕೃತ ಲಾಟರಿ (ಖುರ್ರಾ) ಮುಖಾಂತರ ಜಿಲ್ಲಾವಾರು ನಿಗದಿಪಡಿಸಿರುವ ಕೋಟಾದನ್ವಯ ಆಯ್ಕೆ ಪ್ರಕ್ರಿಯೆ ನಡೆಯುತ್ತದೆ. |
| ಇ. | ರಾಜ್ಯದಲ್ಲಿ ಕಳೆದ 03 ವರ್ಷಗಳಿಂದ ಹಜ್ ಯಾತ್ರೆಗೆ ವೆಚ್ಚವಾಗಿರುವ ಅನುದಾನವೆಷ್ಟು; ಸದರಿ ಅನುದಾನವನ್ನು ಯಾವ ಲೆಕ್ಕಶೀರ್ಷಿಕೆಯಡಿಯಲ್ಲಿ ಭರಿಸಲಾಗುವುದು? (ವಿಧಾನಸಭಾ ಕ್ಷೇತ್ರವಾರು ವರ್ಷಾವಾರು ಸಂಪೂರ್ಣ ಮಾಹಿತಿ ನೀಡುವುದು) | ಹಜ್ ಯಾತ್ರೆಗೆ ಸರ್ಕಾರದಿಂದ ಯಾವುದೇ ಅನುದಾನ ನೀಡಲಾಗುತ್ತಿಲ್ಲ. |

ಸಂಖ್ಯೆ: MWD 118 LMQ 2022

(ಶಶಿಕಲಾ ಅ. ಜೊಲ್ಲೆ)
ಮುಜರಾಯಿ, ಹಜ್
ಮತ್ತು ವಕ್ಫ್ ಸಚಿವರು

ಅನುಬಂಧ-1

## ಅನುಭಂದ – 1

ಹಜ್ – 2019 ನೇ ಸಾಲಿನಲ್ಲಿ ಕರ್ನಾಟಕ ರಾಜ್ಯದಿಂದ ಹಜ್ ಯಾತ್ರೆಗೆ ಪ್ರಯಾಣ ಮಾಡಿದವರ ಈ ವಿವರ ಕೆಳಕಂಡಂತಿದೆ.

| | ಜಿಲ್ಲೆಯ ಹೆಸರು | 2019 |
|---|---|---|
| 1 | ಬಾಗಲಕೋಟೆ | 174 |
| 2 | ಬೆಂಗಳೂರು (ನಗರ) | 2458 |
| 3 | ಬೆಂಗಳೂರು (ಗ್ರಾಮಾಂತರ) | 105 |
| 4 | ಬೆಳಗಾವಿ | 470 |
| 5 | ಬಳ್ಳಾರಿ | 167 |
| 6 | ಬೀದರ | 417 |
| 7 | ಬಿಜಾಪುರ | 272 |
| 8 | ಚಿತ್ರದುರ್ಗ | 119 |
| 9 | ಚಿಕ್ಕಮಗಳೂರು | 109 |
| 10 | ಚಾಮರಾಜನಗರ | 46 |
| 11 | ಚಿಕ್ಕಬಳ್ಳಾಪುರ | 109 |
| 12 | ದಕ್ಷಿಣ ಕನ್ನಡ | 627 |
| 13 | ದಾವಣಗೆರೆ | 214 |
| 14 | ಧಾರವಾಡ | 321 |
| 15 | ಗದಗ | 68 |
| 16 | ಕಲ್ಬುರ್ಗಿ | 571 |
| 17 | ಹಾಸನ | 117 |
| 18 | ಹಾವೇರಿ | 102 |
| 19 | ಕೋಲಾರ | 192 |
| 20 | ಕೊಡಗು | 73 |
| 21 | ಕೊಪ್ಪಳ | 51 |
| 22 | ಮೈಸೂರು | 436 |
| 23 | ಮಂಡ್ಯ | 98 |
| 24 | ರಾಯಚೂರು | 184 |
| 25 | ರಾಮನಗರ | 233 |
| 26 | ಶಿವಮೊಗ್ಗ | 125 |
| 27 | ತುಮಕೂರು | 185 |
| 28 | ಉತ್ತರ ಕನ್ನಡ | 133 |
| 29 | ಉಡುಪಿ | 76 |
| 30 | ಯಾದಗಿರಿ | 85 |
| | ಒಟ್ಟು | 8337 |